# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ನವೆಂಬರ್ ೨೪, ೨೦೧೬ (ಮಾರ್ಗಶಿರ ೩, ಶಕ ವರ್ಷ ೧೯೩೮)<br>Bengaluru, Thursday, November 24, 2016 (Margashira 3, Shaka Varsha 1938) | ಸಂಚಿಕೆ ೪೬<br>Issue 46 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯಗಳಲ್ಲಿ ಖಾಲಿ ಇರುವ ಗ್ರೂಪ್–"ಡಿ" ವೃಂದದ ಅಡುಗೆಯವರು ಹಾಗೂ ಅಡುಗೆ ಸಹಾಯಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಮಾರ್ಗಸೂಚಿಗಳನ್ನು ಹೊರಡಿಸುವ ಕುರಿತು.

**ಓದಲಾಗಿದೆ :**

1) ಮಾನ್ಯ ಮುಖ್ಯಮಂತ್ರಿಯವರ 2013–14ನೇ ಸಾಲಿನ ಆಯವ್ಯಯ ಘೋಷಣೆ.
2) ಸರ್ಕಾರದ ಆದೇಶ ಸಂಖ್ಯೆ: ಹಿಂವಕ 336 ಬಿಇಟಿ 2015 ದಿ: 05–11–2015.
3) ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು ದಿ: 21–07–2016.
4) ಸರ್ಕಾರದ ಆದೇಶ ಸಂಖ್ಯೆ: ಸಕಇ 498 ಪಕಸೇ 2001, ದಿ: 29–02–2001.
5) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 239 ಬಿಇಟಿ 2007, ದಿ: 18–10–2007.
6) ಸರ್ಕಾರದ ಆದೇಶ ಸಂಖ್ಯೆ: ಹಿಂವಕ 306 ಬಿಇಟಿ 2014, ದಿ: 10–07–2015.
7) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 30 ಎಸ್‌ಆರ್‌ಆರ್ 2013, ದಿ: 06–01–2014.
8) ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಕಚೇರಿ ಟಿಪ್ಪಣಿ ಸಂಖ್ಯೆ: ಹಿಂವಕನಿ/ಸಿಬ್ಬಂದಿ–4/ಸಿಆರ್–8/2015–16, ದಿ: 22–09–2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಮಾನ್ಯ ಮುಖ್ಯಮಂತ್ರಿಗಳು 2013–14ನೇ ಸಾಲಿನ ಆಯವ್ಯಯ ಘೋಷಣೆಯ ಕಂಡಿಕೆ–276ರಲ್ಲಿ ವಿದ್ಯಾರ್ಥಿನಿಲಯಗಳಲ್ಲಿ ಖಾಲಿ ಇರುವ ಎಲ್ಲಾ ಸಮೂಹ "ಡಿ" ಹುದ್ದೆಗಳನ್ನು ಭರ್ತಿ ಮಾಡಲಾಗುವುದೆಂದು ಘೋಷಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಗ್ರೂಪ್–"ಡಿ" ಹುದ್ದೆಗಳನ್ನು ಜಿಲ್ಲಾ ಮಟ್ಟದ ನೇಮಕ ಆಯ್ಕೆ ಸಮಿತಿಯ ಮುಖಾಂತರ ನಿಯಮಾನುಸಾರ ಅಡುಗೆಯವರು–1547, ಅಡುಗೆ ಸಹಾಯಕರು–2470 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ : 27–01–2016ರಂದು ನಡೆದ ಸಭೆಯ ನಡವಳಿಗಳಲ್ಲಿ ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯಗಳಲ್ಲಿ ಖಾಲಿ ಇರುವ ಗ್ರೂಪ್–"ಡಿ" ವೃಂದ ಹುದ್ದೆಗಳನ್ನು ನೇರ ನೇಮಕಾತಿ ಮಾಡುವ ಬಗ್ಗೆ ನಿರ್ಣಯಿಸಿ ಮಾರ್ಗಸೂಚಿಗಳನ್ನು ರೂಪಿಸಲಾಗಿದೆ.

1) ರಾಜ್ಯಾದ್ಯಂತ ಏಕಕಾಲದಲ್ಲಿ ಜಿಲ್ಲಾಧಿಕಾರಿಗಳ ನೇತೃತ್ವದ ಸಮಿತಿಯು ಅಡುಗೆ ತಯಾರಿಕೆ ಬಗ್ಗೆ ಪ್ರಾಯೋಗಿಕ ಪರೀಕ್ಷೆ ನಡೆಸುವುದು, ಪ್ರಾಯೋಗಿಕ ಪರೀಕ್ಷೆಗೆ ಯಾವುದೇ ಅಂಕಗಳನ್ನು ನಿಗದಿ ಮಾಡಬಾರದು. ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸಿ, ಪ್ರಾಯೋಗಿಕ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಯನ್ನು ಎಸ್.ಎಸ್.ಎಲ್.ಸಿ. ಪರೀಕ್ಷೆಯ ಅಂಕಗಳ ಮೆರಿಟ್ ಆಧಾರದ ಮೇಲೆ ನಿಯಮಾನುಸಾರ ಆಯ್ಕೆ ಮಾಡುವುದು.
2) ಮೇಲ್ಕಂಡ ನೇಮಕಾತಿ ಪ್ರಕ್ರಿಯೆಯ ಎಲ್ಲಾ ಚಟುವಟಿಕೆಗಳನ್ನು ವಿಡಿಯೋ ಚಿತ್ರೀಕರಣ ಮಾಡುವುದು.

ಮೇಲೆ ಓದಲಾದ ಕ್ರಸಂ. (4)ರ ಸರ್ಕಾರದ ಆದೇಶದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ವಿದ್ಯಾರ್ಥಿನಿಲಯಗಳಲ್ಲಿ ಖಾಲಿ ಇರುವ ಗ್ರೂಪ್–"ಡಿ" ವೃಂದದ ಹುದ್ದೆಗಳನ್ನು ಭರ್ತಿ ಮಾಡಲು ಜಿಲ್ಲಾ ಮಟ್ಟದಲ್ಲಿ ಈ ಕೆಳಕಂಡಂತೆ ಸಮಿತಿ ರಚಿಸಲಾಗಿದೆ.

| ಕ್ರ. ಸಂ. | ಸಮಿತಿಯ ವಿವರ | |
|---|---|---|
| 1. | ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಆಯಾ ಜಿಲ್ಲೆಯ ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು, ಜಿಲ್ಲಾ ಪಂಚಾಯತ್ | ಸದಸ್ಯರು |
| 3. | ಸಂಬಂಧಪಟ್ಟ ಇಲಾಖಾ ನಿರ್ದೇಶಕರ ಕಚೇರಿಯ ಅಧಿಕಾರಿ ಪ್ರತಿನಿಧಿ (ಉಪ ನಿರ್ದೇಶಕರ ಹುದ್ದೆಗಿಂತ ಕಡಿಮೆ ಇಲ್ಲದ ಶ್ರೇಣಿಯ ಅಧಿಕಾರಿ) | ಸದಸ್ಯರು |
| 4. | ಆಯಾ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು | ಸದಸ್ಯರು |
| 5. | ಆಯಾ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು | ಸದಸ್ಯ ಕಾರ್ಯದರ್ಶಿ |

ಮೇಲೆ ಓದಲಾದ ಕ್ರ.ಸಂ. (5)ರಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿವಿಧ ವೃಂದದ ಹುದ್ದೆಗಳ ನೇಮಕಾತಿಗಾಗಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಿದ್ದು ಅದರಂತೆ ಪ್ರಕ್ರಿಯೆ ನಡೆಸಲಾಗುತ್ತಿದೆ. ಸದರಿ ನಿಯಮಾವಳಿಯಲ್ಲಿ ಅಡುಗೆಯವರು ಮತ್ತು ಅಡುಗೆ ಸಹಾಯಕರ ಹುದ್ದೆಗಳನ್ನು ನೇಮಕಾತಿಯನ್ನು ವಿದ್ಯಾರ್ಥಿನಿಲಯವಾರು ಖಾಲಿ ಇರುವ ಹುದ್ದೆಗೆ ಅನುಗುಣವಾಗಿ ಭರ್ತಿ ಮಾಡಲಾಗುತ್ತಿದೆ.

ಮೇಲೆ ಓದಲಾದ ಕ್ರ.ಸಂ. (6)ರ ಆದೇಶದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯಲ್ಲಿರುವ ಆಶ್ರಮ ಶಾಲಾ ಶಿಕ್ಷಕರು, ಅಡುಗೆಯವರು, ಅಡುಗೆ ಸಹಾಯಕರು, ಕಾವಲುಗಾರರ ವೃಂದಗಳನ್ನು ಪುರುಷ ಮತ್ತು ಮಹಿಳೆಯರ ವೃಂದವಾಗಿ ಪ್ರತ್ಯೇಕಪಡಿಸಿ ಪುನರ್ ಪದನಾಮಕರಣಗೊಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (7)ರ ಸರ್ಕಾರದ ಅಧಿಸೂಚನೆಯಲ್ಲಿ ಗ್ರೂಪ್–"ಡಿ" ವೃಂದದ ಹುದ್ದೆಗಳಿಗೆ ಶೈಕ್ಷಣಿಕ ಅರ್ಹತೆಯನ್ನು 7ನೇ ತರಗತಿ ಬದಲಿಗೆ 10ನೇ ತರಗತಿ ಅಥವಾ ಸಮಾನಾಂತರ ವಿದ್ಯಾರ್ಹತೆ ನಿಗದಿಪಡಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (8)ರ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಪ್ರಸ್ತಾವನೆಯಲ್ಲಿ ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯಗಳಲ್ಲಿ ಖಾಲಿ ಇರುವ ಅಡುಗೆಯವರು ಹಾಗೂ ಅಡುಗೆ ಸಹಾಯಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲು ಅಗತ್ಯ ಮಾರ್ಗಸೂಚಿಗಳನ್ನು ಸರ್ಕಾರದ ಆದೇಶದ ಮೂಲಕ ಹೊರಡಿಸಲು, ಈ ಸಂಬಂಧ ಕರಡು ಮಾರ್ಗಸೂಚಿಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 90 ಬಿಇಟಿ 2016 (ಭಾಗ–2), ಬೆಂಗಳೂರು ದಿನಾಂಕ: 29–09–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯಗಳಲ್ಲಿ ಖಾಲಿ ಇರುವ ಗ್ರೂಪ್–"ಡಿ" ವೃಂದದ ಅಡುಗೆಯವರು ಹಾಗೂ ಅಡುಗೆ ಸಹಾಯಕರ ಹುದ್ದೆಗಳನ್ನು ಜಿಲ್ಲಾ ಮಟ್ಟದಲ್ಲಿ ನೇರ ನೇಮಕಾತಿ ಮಾಡಲು ಈಗಾಗಲೆ ಅನುಮೋದನೆ ನೀಡಲಾಗಿದ್ದು, ಜಿಲ್ಲಾ ಮಟ್ಟದಲ್ಲಿನ ಗ್ರೂಪ್–"ಡಿ" ವೃಂದದ ಹುದ್ದೆಗಳ ನೇರ ನೇಮಕಾತಿ ಪ್ರಕ್ರಿಯೆಗೆ ಸಂಬಂಧಿಸಿದ ಮಾರ್ಗಸೂಚಿ ಅನುಬಂಧ–1ಕ್ಕೆ ಸರ್ಕಾರದ ಅನುಮೋದನೆ ನೀಡಲಾಗಿದೆ. ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಜಿಲ್ಲಾವಾರು ಖಾಲಿ ಹುದ್ದೆಗಳ ವಿವರಗಳನ್ನು ಅನುಬಂಧ–2 ಮತ್ತು ಅನುಬಂಧ–3ರಲ್ಲಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಆರ್. ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 90 ಬಿಇಟಿ 2016 (ಭಾಗ–2), ಬೆಂಗಳೂರು ದಿನಾಂಕ: 29–09–2016ಕ್ಕೆ ಅನುಬಂಧ**

**ಅನುಬಂಧ–1**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯಗಳಲ್ಲಿ ಖಾಲಿ ಇರುವ ಅಡುಗೆಯವರು ಹಾಗೂ ಅಡುಗೆ ಸಹಾಯಕರ ನೇರ ನೇಮಕಾತಿ ಮಾರ್ಗಸೂಚಿಗಳು**

ಸರ್ಕಾರದ ಆದೇಶ ಸಂಖ್ಯೆ: ಹಿಂವಕ 336 ಬಿಇಟಿ 2015, ಬೆಂಗಳೂರು, ದಿನಾಂಕ:05.11.2015ರಲ್ಲಿ ಸರ್ಕಾರವು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿ ಖಾಲಿ ಇರುವ ಅಡುಗೆಯವರು ಹಾಗೂ ಅಡುಗೆ ಸಹಾಯಕರ ಹುದ್ದೆಗಳ ನೇರ ನೇಮಕಾತಿಗೆ ಅನುಮತಿ ನೀಡಿ ಆದೇಶ ಹೊರಡಿಸಿದ್ದು, ಅದರಂತೆ ಜಿಲ್ಲಾ ಮಟ್ಟದಲ್ಲಿ ನೇಮಕಾತಿ ಪ್ರಕ್ರಿಯೆಗೆ ಸಂಬಂಧಿಸಿದಂತೆ ಅಗತ್ಯ ಮಾರ್ಗಸೂಚಿಗಳನ್ನು ಈ ಕೆಳಕಂಡಂತೆ ಹೊರಡಿಸಲಾಗಿದೆ.

**ಜಿಲ್ಲಾ ಮಟ್ಟದ ನೇಮಕಾತಿ ಸಮಿತಿ:**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿ ಖಾಲಿ ಇರುವ ಅಡುಗೆಯವರು ಹಾಗೂ ಅಡುಗೆ ಸಹಾಯಕರ ಹುದ್ದೆಗಳ ನೇರ ನೇಮಕಾತಿ ಪ್ರಕ್ರಿಯೆ ನಡೆಸಲು ಆಯಾ ಜಿಲ್ಲೆಗೆ ಸಂಬಂಧಿಸಿದಂತೆ ಈ ಕೆಳಕಂಡ ಸಮಿತಿಯನ್ನು ರಚಿಸಲಾಗಿದೆ.

| ಕ್ರ.ಸಂ | ಸಮಿತಿಯ ವಿವರ | |
|---|---|---|
| 1. | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಜಿಲ್ಲಾ ಪಂಚಾಯತ್ ಮುಖ್ಯಕಾರ್ಯನಿರ್ವಹಣಾಧಿಕಾರಿಗಳು | ಸದಸ್ಯರು |
| 3. | ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು | ಸದಸ್ಯರು |
| 4. | ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ | ಸದಸ್ಯರು |
| 5. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು | ಸದಸ್ಯರು |
| 6. | ಉಪ ನಿರ್ದೇಶಕರು/ಜಂಟಿ ನಿರ್ದೇಶಕರು ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 7. | ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು | ಸದಸ್ಯ ಕಾರ್ಯದರ್ಶಿ |

ಜಿಲ್ಲಾ ಮಟ್ಟದ ನೇಮಕಾತಿ ಪ್ರಾಧಿಕಾರವು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿ ಖಾಲಿ ಇರುವ ಅಡುಗೆಯವರು ಹಾಗೂ ಅಡುಗೆ ಸಹಾಯಕರ ಹುದ್ದೆಗಳ ನೇಮಕಾತಿಯನ್ನು ನಿಗದಿಪಡಿಸಿದ ವೇಳಾಪಟ್ಟಿಯಂತೆ ನಿಯಮಾನುಸಾರ ಮಾಡತಕ್ಕದ್ದು.

**1. ನೇಮಕಾತಿ ಮಾಡಬೇಕಾದ ಹುದ್ದೆಗಳ ವಿವರ:**

| ಕ್ರ.ಸಂ | ಹುದ್ದೆಗಳ ವಿವರ | ವೃಂದ | ವೇತನ ಶ್ರೇಣಿ |
|---|---|---|---|
| 1. | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳ **'ಅಡುಗೆಯವರು'** | 'ಡಿ' | ₹. 10,400–200–12,000–250–13,000–300–14,200–350–15,600–400–16,400/– |
| 2. | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳ **'ಅಡುಗೆ ಸಹಾಯಕರು'** | 'ಡಿ' | ₹.9,600–200–12,000–250–13,000–300–14,200–350–14,550/– |

**2. ಅಭ್ಯರ್ಥಿಗೆ ನಿಗಧಿಪಡಿಸಿದ ಅರ್ಹತೆಗಳು:**

1. ಭಾರತೀಯ ನಾಗರೀಕನಾಗಿರತಕ್ಕದ್ದು.
2. ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಅರ್ಹರಿರುವುದಿಲ್ಲ.
3. ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟುಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.
4. ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ಜಿಲ್ಲಾ ನೇಮಕಾತಿ ಪ್ರಾಧಿಕಾರವು ಕಾಯ್ದಿರಿಸಿಕೊಂಡಿದೆ.

**3. ಶೈಕ್ಷಣಿಕ ವಿದ್ಯಾರ್ಹತೆ:**

ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.

**4. ಪಿಂಚಣಿ ಸೌಲಭ್ಯ:**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿ ಅಡುಗೆಯವರು/ಅಡುಗೆ ಸಹಾಯಕರ ಹುದ್ದೆಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ (ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ: 31.03.2006ರಂತೆ ಪಿಂಚಣಿ ಸೌಲಭ್ಯ ಇರುವುದಿಲ್ಲ.

**5. ವಯೋಮಿತಿ:**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು ಹಾಗೂ

ಆ) ಗರಿಷ್ಠ ವಯೋಮಿತಿ ವಿವರಗಳು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ | ಜಾತಿ/ಪ್ರವರ್ಗ | ಗರಿಷ್ಠ ವಯೋಮಿತಿ |
|---|---|---|
| 1. | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಪ್ರವರ್ಗ–Iರ ಅಭ್ಯರ್ಥಿಗಳಿಗೆ | 40 ವರ್ಷ |
| 2. | ಪ್ರವರ್ಗ–2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳಿಗೆ | 38 ವರ್ಷ |
| 3. | ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳಿಗೆ | 35 ವರ್ಷ |

ಅಭ್ಯರ್ಥಿಗಳ ಜನ್ಮ ದಿನಾಂಕವನ್ನು ಅವರ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ), ಕ್ಯುಮುಲೇಟಿವ್ ರೆಕಾರ್ಡ್‌ನಲ್ಲಿ ನಮೂದಿಸಿರುವಂತೆ ಪರಿಗಣಿಸಲಾಗುವುದು. ಇವುಗಳನ್ನು ಹೊರತುಪಡಿಸಿ ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

ಈ ಮುಂದಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಈ ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ವಿನಾಯಿತಿ ನೀಡಲಾಗುವುದು.

i) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ii) ಅಭ್ಯರ್ಥಿಯು ಮಾಜಿ ಸೈನಿಕವಾಗಿದ್ದಲ್ಲಿ ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ :** (ಎ) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ, ಅಂದರೆ ಡಿಫೆನ್ಸ್ ಸೆಕ್ಯೂರಿಟಿಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ. ಮತ್ತು (ಬಿ) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ. ಮತ್ತು

ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಸೇವೆಯಲ್ಲಿ ಬಿಡುಗಡೆಯಾದವನು.

**ಅಥವಾ**

ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇನೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

ಈ ಮೇಲ್ಕಂಡ ವರ್ಗದ ಅಭ್ಯರ್ಥಿಗಳು ಮಾಜಿ ಸೈನಿಕ ಮೀಸಲಾತಿಗೆ ಅರ್ಹರಿರುತ್ತಾರೆ.

**ವಿವರಣೆ :** ಕೇಂದ್ರ ಸಶಸ್ತ್ರ ದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

iii. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್‌ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

iv) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

v) ವಿಕಲಾಂಗ ಚೇತನ ಹಾಗೂ ವಿಧವೆಯವರಿಗೆ 10 ವರ್ಷಗಳು ವಿನಾಯಿತಿ ನೀಡಲಾಗುವುದು.

vi) ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.

ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯು ವಯೋಮಿತಿ ಸಡಿಲಿಕೆ ಪಡೆಯಲು ಸದರಿ ಅಧಿನಿಯಮ ಅಥವಾ 1957 ರ ಕರ್ನಾಟಕ ಜೀತಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ರಿಂದ ಪಡೆದಿಟ್ಟುಕೊಂಡಿರತಕ್ಕದ್ದು.

ಮೇಲ್ಕಂಡ ಎಲ್ಲಾ ವರ್ಗಗಳಲ್ಲಿ ವಯೋಮಿತಿ ರಿಯಾಯಿತಿ ಪಡೆಯಲಿಚ್ಚಿಸುವ ಅಭ್ಯರ್ಥಿಗಳು ಸೂಚನೆಯನ್ನು ಎಚ್ಚರಿಕೆಯಿಂದ ಓದಿ ರಿಯಾಯಿತಿಗೆ ಅರ್ಜಿ ಸಲ್ಲಿಸತಕ್ಕದ್ದು.

**6. ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :**

**ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು :**

1. ಪ.ಜಾ./ಪ.ಪಂ. ಅಭ್ಯರ್ಥಿಗಳು ನಮೂನೆ 'ಡಿ' ರಲ್ಲಿ
2. ಪ್ರವರ್ಗ–1 ರ ಅಭ್ಯರ್ಥಿಗಳು ನಮೂನೆ 'ಇ' ರಲ್ಲಿ
3. 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಸಂಬಂಧಿತ ತಹಶೀಲ್ದಾರ ರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು. ಅಂದರೆ, ಹಿಂದುಳಿದ ವರ್ಗಗಳ ಪ್ರ–2ಎ, ಪ್ರ–2ಬಿ, ಪ್ರ–3ಎ ಮತ್ತು ಪ್ರ–3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದ ದಿನಾಂಕದಿಂದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ ದವರೆಗೆ 05 ವರ್ಷಗಳ ಅವಧಿಯಲ್ಲಿರಬೇಕು.

**7. ಗ್ರಾಮೀಣ ಅಭ್ಯರ್ಥಿ:**

1. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಈ ಪ್ರಮಾಣ ಪತ್ರಗಳು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು.
2. ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–I, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ–2ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.
3. ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರ್‌ರವರಿಂದ ಪಡೆದಿರತಕ್ಕದ್ದು.
4. ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೆ ಅನರ್ಹರಾಗುತ್ತಾರೆ.

   ಸೂಚನೆ: ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ–2ರಲ್ಲಿಯ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಅದಕ್ಕೆ ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು.

**8. ಕನ್ನಡ ಮಾಧ್ಯಮ ಅಭ್ಯರ್ಥಿ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು.

**9. ಯೋಜನಾ ನಿರಾಶ್ರಿತ ಅಭ್ಯರ್ಥಿ:**

ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 23 ಸೇನೇನಿ 99, ದಿನಾಂಕ: 20–11–2000ರನ್ವಯ ಯೋಜನೆಗಳಿಂದ ನಿರ್ವಸಿತರಾದ (ಈ ನಿಯಮಗಳು ಜಾರಿಯಾಗುವ 20 ವರ್ಷಗಳಿಗೆ ಮುನ್ನ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳು ಈ ಮೀಸಲಾತಿಗೆ ಅನ್ವಯವಾಗುವುದಿಲ್ಲ) ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿರಬೇಕು.

**10. ಅಂಗವಿಕಲ ಅಭ್ಯರ್ಥಿ:**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಸರ್ಕಾರದ ಆದೇಶ ಸಂಖ್ಯೆ: WCD 261 PHP 2015, Bengaluru, Dated: 20.01.2016ರ ಶೆಡ್ಯೂಲ್ 2ರಲ್ಲಿ ಕ್ರಮ ಸಂಖ್ಯೆ 9ರಲ್ಲಿ ಅಡುಗೆಯವರಿಗೆ ನಿರ್ದಿಷ್ಟಪಡಿಸಿರುವಂತೆ (Low vision, Leprosy cured, Hearing impairment, Loco motor, disability, Mental retardation & Mental illness) ಹಾಗೂ ಅಡುಗೆ ಸಹಾಯಕರಿಗೆ ಕ್ರಮ ಸಂಖ್ಯೆ 10ರಲ್ಲಿ ನಿರ್ದಿಷ್ಟಪಡಿಸಿರುವಂತೆ (Blind, Low vision, Leprosy cured, Hearing impairment, Loco motor, disability, Mental retardation & Mental illness) ಶೇ 40ಕ್ಕಿಂತ ಹೆಚ್ಚು ವೈಕಲ್ಯತೆ ಹೊಂದಿರುವ ವ್ಯಕ್ತಿಗಳು.

ಅಂಗವಿಕಲರಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ: 19–11–2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೇನೇನಿ 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಲತೆಯ ಬಗ್ಗೆ ಜಿಲ್ಲಾಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 74 ಸೇನೇನಿ 2006 ದಿನಾಂಕ: 30–10–2007ರಲ್ಲಿ ಅಂಧ/ದೃಷ್ಟಿ ಮಾಂದ್ಯ ಅಂಗವಿಕಲತೆಯ ಮೀಸಲಾತಿ ಕೋರಿದ್ದಲ್ಲಿ, ಆಯ್ಕೆ ಪ್ರಾಧಿಕಾರವು ವೈದ್ಯಕೀಯ ಸಮಿತಿಯನ್ನು ರಚಿಸಿ, ವೈದ್ಯಕೀಯ ಪರೀಕ್ಷೆಯಲ್ಲಿ ಅಂತಹ ಅಭ್ಯರ್ಥಿಗಳ ಅಂಧ/ದೃಷ್ಟಿ ಮಾಂದ್ಯತೆಯನ್ನು ಪರೀಕ್ಷಿಸಿ ಖಚಿತಪಡಿಸಿಕೊಳ್ಳಬೇಕೆಂದು ನಿರ್ದಿಷ್ಟಪಡಿಸಿದ್ದು, ಅದರಂತೆ ಆಯ್ಕೆ ಪ್ರಾಧಿಕಾರವು ಪರೀಕ್ಷಾ ಪೂರ್ವ ಅಥವಾ ಪರೀಕ್ಷೋತ್ತರದ ನಂತರ ನಡೆಸುವ ವೈದ್ಯಕೀಯ ಪರೀಕ್ಷೆಯ ಅಂತಿಮ ವರದಿಗೆ ಅಂಧ/ದೃಷ್ಟಿ ಮಾಂದ್ಯ ಅಭ್ಯರ್ಥಿಗಳ ಮೀಸಲಾತಿಯು ಬದ್ಧವಾಗಿರುತ್ತದೆ.

**11. ಅನುಚ್ಛೇಧ 371 (ಜೆ) ರಂತೆ ಹೈದರಾಬಾದ್ – ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಾತಿ :**

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು 2013ಕ್ಕೆ ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ವ್ಯಕ್ತಿಯೆಂಬ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಅನುಬಂಧ–'ಎ'ರಲ್ಲಿ ಸೂಚಿಸಿರುವ ನಮೂನೆಯಲ್ಲಿಯೇ ಅರ್ಹತಾ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರವಾದ ಸಂಬಂಧಪಟ್ಟ ಉಪ ವಿಭಾಗದ ಸಹಾಯಕ ಆಯುಕ್ತರಿಂದ, ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಹಿ, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು. ಈ ನಮೂನೆಯನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಯಲ್ಲಿ ಪಡೆಯಲಾದ ಅರ್ಹತಾ ಪ್ರಮಾಣ ಪತ್ರವನ್ನು ತಿರಸ್ಕರಿಸಲಾಗುವುದು.

ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಯು ಉಳಿದ ವೃಂದದ ಹುದ್ದೆಗಳಿಗೂ ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ. ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳು ಸ್ಥಳೀಯ ವೃಂದದ ಹುದ್ದೆಗೆ ಮತ್ತು ಉಳಿದ ವೃಂದದ ಹುದ್ದೆಗೂ ಆಯ್ಕೆಯಾದಲ್ಲಿ ಯಾವ ವೃಂದದ ಆಯ್ಕೆ ಬಯಸುವರೆಂಬ ಆದ್ಯತೆಯನ್ನು ಅರ್ಜಿಯಲ್ಲಿ ನಮೂದಿಸತಕ್ಕದ್ದು.

**ಸೂಚನೆ:** ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು. ಈ ಮೇಲೆ ನಮೂದಿಸಿರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ. ಪ್ರಮಾಣ ಪತ್ರಗಳನ್ನು ನೇಮಕಾತಿ ಪ್ರಾಧಿಕಾರ ಪರಿಶೀಲಿಸುವ ಸಂದರ್ಭದಲ್ಲಿ ತಪ್ಪದೇ ಹಾಜರುಪಡಿಸತಕ್ಕದ್ದು, ಇದಕ್ಕೆ ಹೆಚ್ಚಿನ ಕಾಲಾವಕಾಶ ನೀಡಲಾಗುವುದಿಲ್ಲ. ಅರ್ಹತೆ, ಮೀಸಲಾತಿ ಇತ್ಯಾದಿಗಳ ಬಗ್ಗೆ ಅಭ್ಯರ್ಥಿಯು ಖಾತ್ರಿಪಡಿಸಿಕೊಂಡು ಅರ್ಜಿ ಸಲ್ಲಿಸುವುದು ಅವರ ವೈಯಕ್ತಿಕ ಜವಾಬ್ದಾರಿಯಾಗಿರುತ್ತದೆ. ತಪ್ಪು ಮಾಹಿತಿ ನೀಡಿದ್ದಲ್ಲಿ ನೇಮಕಾತಿಗೆ ಅರ್ಹರಾಗುವುದಿಲ್ಲ.

12. **ಅಭ್ಯರ್ಥಿಗಳು ಒಮ್ಮೆ ಸಲ್ಲಿಸಿದ ಅರ್ಜಿಯನ್ನು ಯಾವುದೇ ಕಾರಣದಿಂದಲೂ ತಿದ್ದುಪಡಿ ಮಾಡಲು ಅವಕಾಶವಿರುವುದಿಲ್ಲ.**

13. **ಅರ್ಜಿ ಸಲ್ಲಿಸುವ ವಿಧಾನ:**

1. On-line ಮುಖಾಂತರ ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸತಕ್ಕದ್ದು.
2. On-line ಹೊರತುಪಡಿಸಿ ಯಾವುದೇ ವಿಧದಲ್ಲಿ ಅರ್ಜಿಯನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. On-line ಅರ್ಜಿಯ ಪ್ರತಿಯನ್ನು ಅಂಚೆ ಮುಖಾಂತರವಾಗಲೀ, ಮುದ್ದಾಂ ಆಗಿ ಆಗಲೀ ಅಥವಾ ಇನ್ನಿತರ ವಿಧಾನಗಳಲ್ಲಿ ಇಲಾಖೆಗೆ ಸಲ್ಲಿಸಬೇಕಾದ ಅವಶ್ಯಕತೆ ಇರುವುದಿಲ್ಲ.
3. ಒಬ್ಬ ಅಭ್ಯರ್ಥಿಯು ಒಂದು ಅಥವಾ ಎರಡೂ ಹುದ್ದೆಗಳಿಗೂ ಪ್ರತ್ಯೇಕ ಅರ್ಜಿ ಸಲ್ಲಿಸಬಹುದು.
4. ಅರ್ಜಿಯ ಜೊತೆಗೆ ಯಾವುದೇ ಮೂಲ/ನಕಲು/ಜೆರಾಕ್ಸ್ ದಾಖಲಾತಿಗಳು, ಪ್ರಮಾಣ ಪತ್ರಗಳು, ಇತ್ಯಾದಿಗಳನ್ನು ಸಲ್ಲಿಸಬೇಕಾಗಿರುವುದಿಲ್ಲ.
5. ಅಭ್ಯರ್ಥಿಯು ಅರ್ಜಿಯನ್ನು ಸಲ್ಲಿಸುವ ಮೊದಲು, ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದ ಒಳಗೆ ಸಂಬಂಧಿಸಿದ ಪ್ರಾಧಿಕಾರಗಳಿಂದ ಅವಶ್ಯವಿರುವ ಎಲ್ಲಾ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡು, ಸದರಿ ಮೂಲ ದಾಖಲೆ, ಪ್ರಮಾಣ ಪತ್ರಗಳಲ್ಲಿರುವ ಮಾಹಿತಿಯನ್ನು ಸರಿಯಾಗಿ, ಸ್ಪಷ್ಟವಾಗಿ ಮತ್ತು ಸಮರ್ಪಕವಾಗಿ ಆನ್‌ಲೈನ್ ಅರ್ಜಿಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.
6. ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿದ ಆನ್‌ಲೈನ್ ಅರ್ಜಿಯ ಒಂದು ಜೆರಾಕ್ಸ್ ಪ್ರತಿಯನ್ನು ಹಾಗೂ ಶುಲ್ಕ ಪಾವತಿಸಿದ ಬಗ್ಗೆ ರಶೀತಿಯನ್ನು ತೆಗೆದು ತಮ್ಮ ಬಳಿ ಇಟ್ಟುಕೊಳ್ಳತಕ್ಕದ್ದು. ಇದನ್ನು ಇಲಾಖೆಯು ಆಪೇಕ್ಷಿಸಿದಾಗ ಹಾಜರುಪಡಿಸತಕ್ಕದ್ದು.

14. **ಅರ್ಜಿ ಶುಲ್ಕ :**

| ಕ್ರ ಸಂ | ಜಾತಿ/ಪ್ರವರ್ಗ | ಅಡುಗೆಯವರು | ಅಡುಗೆ ಸಹಾಯಕರು |
|---|---|---|---|
| 1. | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ ಪ್ರವರ್ಗ–I ಅಭ್ಯರ್ಥಿಗಳಿಗೆ | ₹. 150/– | ₹. 100/– |
| 2. | ಪ್ರವರ್ಗ–2ಎ, 2ಬಿ, 3ಎ, 3ಬಿ ಹಾಗೂ ಸಾಮಾನ್ಯ ಅರ್ಹತೆ ಅಭ್ಯರ್ಥಿಗಳಿಗೆ | ₹. 250/– | ₹. 200/– |
| ಅಂಗವಿಕಲ ಅಭ್ಯರ್ಥಿಗಳಿಗೆ ಶುಲ್ಕ ವಿನಾಯಿತಿ ಇದೆ. (ಶೇ 40 ಕ್ಕಿಂತ ಅಂಗವಿಕಲತೆ ಹೊಂದಿರುವವರು ಮತ್ತು ಅದಕ್ಕೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರಿಯಿಂದ ಪ್ರಮಾಣ ಪತ್ರ ಹೊಂದಿರುವವರು). | | | |

ಅಭ್ಯರ್ಥಿಯು ಎರಡು ಹುದ್ದೆಗೂ ಅರ್ಜಿ ಸಲ್ಲಿಸುವುದಾದಲ್ಲಿ ಆಯಾ ಹುದ್ದೆಗಳಿಗೆ ನಿಗಧಿಪಡಿಸಿರುವ ಅರ್ಜಿ ಶುಲ್ಕವನ್ನು ಪ್ರತ್ಯೇಕವಾಗಿ ಪಾವತಿಸುವುದು. ಅರ್ಜಿ ಶುಲ್ಕವನ್ನು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ನಿಗದಿಗೊಳಿಸುವ ಬ್ಯಾಂಕ್ ಖಾತೆಗೆ ಆರ್.ಟಿ.ಜಿ.ಎಸ್/ನೆಫ್ಟ್ ಅಥವಾ ನೇರವಾಗಿ ಜಮಾ ಮಾಡಿ ಚಲನ್ ಪಡೆದಿಟ್ಟುಕೊಳ್ಳುವುದು.

**15. ಪ್ರಮುಖ ಸೂಚನೆಗಳು:**

ಅಭ್ಯರ್ಥಿಗಳು ಆನ್‌ಲೈನ್ ಅರ್ಜಿ ಸಲ್ಲಿಸುವುದರಿಂದ ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಲು ಅವಕಾಶವಿರುವುದಿಲ್ಲ. ಆದರೆ ಈ ಕೆಳಕಂಡ ಪ್ರಮಾಣ ಪತ್ರಗಳನ್ನು/ದಾಖಲಾತಿಗಳನ್ನು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಸಿಂಧುವಾಗಿರತಕ್ಕದ್ದು. ಆಯ್ಕೆ ಪ್ರಾಧಿಕಾರವು ಸೂಚಿಸಿದಾಗ ಮೂಲ ದಾಖಲಾತಿಗಳನ್ನು ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗುವುದು.

1. ಕಡ್ಡಾಯವಾಗಿ ಹಾಜರು ಪಡಿಸಬೇಕಾದ ವಿದ್ಯಾರ್ಹತೆ/ಜನ್ಮ ದಿನಾಂಕ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ ಅಭ್ಯರ್ಥಿಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

2. ವಿವಿಧ ಮೀಸಲಾತಿ ಕೋರಿ ಹಾಜರು ಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಅಭ್ಯರ್ಥಿಗಳು ಹಾಜರು ಪಡಿಸದಿದ್ದಲ್ಲಿ ಆ ಮೀಸಲಾತಿಯನ್ನು ರದ್ದು ಪಡಿಸಿ ಸಾಮಾನ್ಯ ಅರ್ಹತೆಯಲ್ಲಿ ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಪರಿಗಣಿಸಲಾಗುವುದು.
3. ರಾಜ್ಯ ಸರ್ಕಾರಿ/ಕೇಂದ್ರ ಸರ್ಕಾರಿ/ಸ್ಥಳೀಯ ಪ್ರಾಧಿಕಾರ ನೌಕರರು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣ ಪತ್ರವನ್ನು ಒದಗಿಸಬೇಕು. ಇಲ್ಲದಿದ್ದಲ್ಲಿ ಅಭ್ಯರ್ಥಿಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**15.1. ಕಡ್ಡಾಯವಾಗಿ ಹಾಜರುಪಡಿಸಬೇಕಾದ ಮೂಲ ಪ್ರಮಾಣ ಪತ್ರಗಳು:**

1. ಈ ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಎಸ್.ಎಸ್.ಎಲ್.ಸಿ ಅಂಕಪಟ್ಟಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿಗಳು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರ (ಟಿ.ಸಿ)/ಜನ್ಮ ದಿನಾಂಕವನ್ನು ತೋರಿಸುವಂತ ದಾಖಲೆಯ ಉದ್ಧೃತಭಾಗ.
3. ವಿವಿಧ ಮೀಸಲಾತಿಗಳನ್ನು ಕೋರಿದ್ದಲ್ಲಿ, ಮೀಸಲಾತಿ ಪ್ರಮಾಣ ಪತ್ರಗಳು.
4. ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು.
5. ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ.

   **ಟಿಪ್ಪಣಿ:** ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆ ಮೀಸಲಾತಿಗೆ ಅರ್ಹರೆ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.
6. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ' ರಲ್ಲಿ, ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ರಲ್ಲಿ ಹಾಗೂ ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ಅಭ್ಯರ್ಥಿಗಳು ನಮೂನೆ 'ಎಫ್' ರಲ್ಲಿ ತಹಶೀಲ್ದಾರ್ ರವರಿಂದ ಪಡೆದಿರುವ ಜಾತಿ/ಆದಾಯ ಪ್ರಮಾಣ ಪತ್ರ.
7. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು ತುಂಬತಕ್ಕದ್ದು ಹಾಗೂ ಅವರ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ('No Objection' Certificate) ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರಬೇಕು.
8. ಹೈದರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳ ಮೀಸಲಾತಿಗೆ ಸಂಬಂದಿಸಿದ ಅರ್ಹತಾ ಪ್ರಮಾಣ ಪತ್ರ ಅನುಬಂಧ–'ಎ' (ಅನುಚ್ಛೇಧ–371(ಜೆ) ಮೇರೆಗೆ)(3)(3)ನೇ ನಿಯಮ ನೋಡಿ).
9. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–2ರಲ್ಲಿ.
10. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ.
11. ಅಂಗವಿಕಲ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪಡೆದ ವೈದ್ಯಕೀಯ ಪ್ರಮಾಣ ಪತ್ರ.
12. ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಜೀತ ಕಾರ್ಮಿಕರು, ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.
13. ಮೀಸಲಾತಿಗೆ ಸಂಬಂಧಿಸಿದಂತೆ ಇತರೆ ದಾಖಲಾತಿಗಳು.

ಈ ಮೇಲಿನ ಅರ್ಹತೆ, ಮೀಸಲಾತಿ ಇತ್ಯಾದಿಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರವೇ ಅಭ್ಯರ್ಥಿಗಳನ್ನು ಅಂಕಗಳ ಜೇಷ್ಠತೆ ಮತ್ತು ಮೀಸಲಾತಿ ಆಧಾರದ ಮೇಲೆ ಆಯ್ಕೆ ಪ್ರಕ್ರಿಯೆಗೆ ಪರಿಗಣಿಸುವುದು.

16 **ಹೆಚ್ಚುವರಿ ಸೂಚನೆಗಳು:**

1) ಅಭ್ಯರ್ಥಿಗಳು ON-LINE ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರುಗಳು ಅಂಕರಹಿತ ಪ್ರಾಯೋಗಿಕ ಪರೀಕ್ಷೆಗೆ ಅರ್ಹರು ಎಂಬುದನ್ನು ಪರಿಶೀಲಿಸಿ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಅಂಕರಹಿತ ಪ್ರಾಯೋಗಿಕ ಪರೀಕ್ಷೆಗಳನ್ನು ನಡೆಸುವುದು.
2) ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ: ವಿದ್ಯಾರ್ಹತೆ, ಹಾಗೂ ವಯೋಮಿತಿ ಸಡಿಲಿಕೆ, ಇತ್ಯಾದಿ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳುವುದು.
3) ಅಪೂರ್ಣವಾಗಿರುವ, ಪೋಟೊ ಮತ್ತು ಸಹಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸುವುದು.
4) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಪೋಟೋ ಪ್ರತಿಯನ್ನು ಕಡ್ಡಾಯವಾಗಿ ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸುವುದು.

**17. ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು:**

| | | | |
|---|---|---|---|
| ಸಾ.ಅ. | ಸಾಮಾನ್ಯ ಅರ್ಹತೆ | GM | General Merit |
| ಪ.ಜಾ. | ಪರಿಶಿಷ್ಟ ಜಾತಿ | SC | Scheduled Caste |

| | | | |
|---|---|---|---|
| ಪ.ಪಂ. | ಪರಿಶಿಷ್ಟ ಪಂಗಡ | ST | Scheduled Tribe |
| ಪ್ರ–1 | ಪ್ರವರ್ಗ–1 | Cat-1 | Category -1 |
| 2ಎ | ಪ್ರವರ್ಗ–2ಎ | 2A | Category -2A |
| 2ಬಿ | ಪ್ರವರ್ಗ–2ಬಿ | 2B | Category-2B |
| 3ಎ | ಪ್ರವರ್ಗ–3ಎ | 3A | Category-3A |
| 3ಬಿ | ಪ್ರವರ್ಗ–3ಬಿ | 3B | Category-3B |
| ಮಾ.ಸೈ. | ಮಾಜಿ ಸೈನಿಕ | Ex-MP | Ex-Military Person |
| ಗ್ರಾಮೀಣ | ಗ್ರಾಮೀಣ ಅಭ್ಯರ್ಥಿ | Rural | Rural Candidate |
| ಕ.ಮಾ.ಅ. | ಕನ್ನಡ ಮಾಧ್ಯಮ ಅಭ್ಯರ್ಥಿ | KMS | Kannada Medium Student |
| ಯೋ.ಅ. | ಯೋಜನಾ ನಿರಾಶ್ರಿತ ಅಭ್ಯರ್ಥಿ | PDP | Project Displaced Person |
| ಅಂ.ವಿ. | ಅಂಗವಿಕಲ | PH | Physically Handicapped Person |
| ಹೈ.ಕ. | ಹೈದರಾಬಾದ್–ಕರ್ನಾಟಕ | H.K | Hyderabad-Karnataka |

**18. ಅಂಕರಹಿತ ಪ್ರಾಯೋಗಿಕ ಅರ್ಹತಾ ಪರೀಕ್ಷೆಗೆ ಆಹ್ವಾನ ಪತ್ರ:**

ಅಭ್ಯರ್ಥಿಗಳಿಗೆ ಪ್ರಾಯೋಗಿಕ ಅರ್ಹತಾ ಪರೀಕ್ಷೆಗೆ ಪ್ರವೇಶ ಪತ್ರಗಳನ್ನು ಪ್ರತ್ಯೇಕವಾಗಿ ಕಳುಹಿಸುವುದಿಲ್ಲ. ಅಭ್ಯರ್ಥಿಗಳು ಸ್ವತಃ ವೆಬ್‌ಸೈಟಿನಿಂದ ಪ್ರವೇಶ ಪತ್ರಗಳನ್ನು Down Load ಮಾಡಿಕೊಂಡು ಪ್ರಾಯೋಗಿಕ ಪರೀಕ್ಷೆಗೆ ಹಾಜರಾಗತಕ್ಕದ್ದು.

**19. ಪತ್ರ ವ್ಯವಹಾರ:**

ಅಭ್ಯರ್ಥಿತ್ವದ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಆದಾಗ್ಯೂ ಪರೀಕ್ಷೆಗಾಗಿ ಪ್ರವೇಶ ಪತ್ರವನ್ನು ಡೌನ್‌ಲೋಡ್ ಮಾಡಿಕೊಳ್ಳುವಲ್ಲಿ ಸಮಸ್ಯೆ ಉಂಟಾದಲ್ಲಿ, ಸಹಾಯವಾಣಿ ಸಂಖ್ಯೆಯನ್ನು (Help line) ಸಂಪರ್ಕಿಸತಕ್ಕದ್ದು, ಅಭ್ಯರ್ಥಿಯು ಮಾಹಿತಿಗಾಗಿ ಸಂಪರ್ಕಿಸುವ ಸಮಯದಲ್ಲಿ ಈ ಹುದ್ದೆಗಳಿಗೆ ಸಲ್ಲಿಸಿದ ಅರ್ಜಿಯ ಕ್ರಮ ಸಂಖ್ಯೆ: ಜನ್ಮ ದಿನಾಂಕ, ಅರ್ಜಿ ಸಲ್ಲಿಸಿದ ಜಿಲ್ಲೆ ಇತ್ಯಾದಿ ವಿವರಗಳನ್ನು ನೀಡತಕ್ಕದ್ದು.

**20. ದುರ್ನಡತೆ:**

ಒಬ್ಬ ಅಭ್ಯರ್ಥಿಯು ನಕಲು ವ್ಯಕ್ತಿಯಾಗಿರುವನೆಂದು ಅಥವಾ ಖೋಟ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಹೊಂದಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪ್ರಾಯೋಗಿಕ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪ್ರಾಯೋಗಿಕ ಪರೀಕ್ಷಾ ಸಂದರ್ಭದಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಹಾಗೂ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡು ಬಂದಲ್ಲಿ ಅಭ್ಯರ್ಥಿಯು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ ನೇಮಕಾತಿಗೆ ಅನರ್ಹರಾಗುತ್ತಾರೆ.

**21. ಆಯ್ಕೆ ವಿಧಾನ:**

ಆನ್‌ಲೈನ್ ಮುಖಾಂತರ ಸ್ವೀಕರಿಸಲ್ಪಡುವ ಅರ್ಜಿಗಳನ್ನು ಪ್ರವರ್ಗವಾರು ಪ್ರತ್ಯೇಕಿಸಿ ಪಟ್ಟಿಯನ್ನು ತಯಾರಿಸುವುದು. ಅರ್ಹರಾದ ಅಭ್ಯರ್ಥಿಗಳ ಮೂಲ ದಾಖಲಾತಿ ಪರಿಶೀಲನೆ ನಡೆಸುವುದು. ದಾಖಲಾತಿ ಪರಿಶೀಲನೆ ನಂತರ ಪ್ರಾಯೋಗಿಕ ಪರೀಕ್ಷೆಗೆ ಅರ್ಹರಾಗುವ ಅಭ್ಯರ್ಥಿಗಳ ಪಟ್ಟಿ ತಯಾರಿಸುವುದು. ಪ್ರಾಯೋಗಿಕ ಪರೀಕ್ಷೆಗೆ ಅರ್ಹರಾದ ಅಭ್ಯರ್ಥಿಗಳಿಗೆ ಈ ಕೆಳಕಂಡಂತೆ ಪ್ರಾಯೋಗಿಕ ಪರೀಕ್ಷೆ ನಡೆಸುವುದು. ಪ್ರಾಯೋಗಿಕ ಪರೀಕ್ಷೆಯನ್ನು ನಿಗದಿತ ಅವಧಿಯೊಳಗೆ ಮುಕ್ತಾಯಗೊಳಿಸಲು ಅವಶ್ಯಕತೆಗೆ ಅನುಗುಣವಾಗಿ ಜಿಲ್ಲಾ ಸಮಿತಿಯು ಅಗತ್ಯ ತಂಡಗಳನ್ನು ರಚಿಸಿಕೊಳ್ಳುವುದು. ಪ್ರಾಯೋಗಿಕ ಅರ್ಹತಾ ಪರೀಕ್ಷೆಗೆ ಹುದ್ದೆಗೆ ಅನುಗುಣವಾಗಿ ಅಭ್ಯರ್ಥಿಗಳನ್ನು ಆಹ್ವಾನಿಸುವ ಹಾಗೂ ಅನುಪಾತ ನಿರ್ಧರಿಸುವ ಅಧಿಕಾರವನ್ನು ಸಂಬಂಧಪಟ್ಟ ಜಿಲ್ಲಾ ನೇಮಕಾತಿ ಪ್ರಾಧಿಕಾರದ ವಿವೇಚನೆಗೆ ನೀಡಲಾಗಿದೆ.

**ಅಂಕರಹಿತ ಪ್ರಾಯೋಗಿಕ ಅರ್ಹತಾ ಪರೀಕ್ಷೆಯ ವಿಧಾನ:**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿ ಖಾಲಿ ಇರುವ ಅಡುಗೆಯವರು ಹಾಗೂ ಅಡುಗೆ ಸಹಾಯಕರ ಹುದ್ದೆಗಳಿಗೆ ನೇರ ನೇಮಕಾತಿ ಮಾಡಿಕೊಳ್ಳುತ್ತಿರುವುದರಿಂದ ಅಭ್ಯರ್ಥಿಗಳಿಗೆ ಅಡುಗೆ ತಯಾರಿಕೆಯ ಬಗ್ಗೆ ಸಾಮಾನ್ಯ ಜ್ಞಾನ ಇರುವುದನ್ನು ಖಚಿತಪಡಿಸಿಕೊಳ್ಳುವುದು ಪ್ರಾಯೋಗಿಕ ಪರೀಕ್ಷೆಯ ಉದ್ದೇಶವಾಗಿರುತ್ತದೆ. ಪ್ರಾಯೋಗಿಕ ಪರೀಕ್ಷೆಯಲ್ಲಿ ಅಡುಗೆ ತಯಾರಿಕೆಗೆ ಸಂಬಂಧಿಸಿದಂತೆ ಈ ಕೆಳಕಂಡ ಆಹಾರ ಪದಾರ್ಥಗಳಲ್ಲಿ ಒಂದು ಆಹಾರ ಪದಾರ್ಥವನ್ನು ತಯಾರಿಸಲು ಅವಕಾಶ ನೀಡುವುದು.

ರವೆ ಉಪ್ಪಿಟ್ಟು

ಅವಲಕ್ಕಿ ಉಪ್ಪಿಟ್ಟು

ಚಪಾತಿ

ಜೋಳದ ರೊಟ್ಟಿ/ಅಕ್ಕಿ ರೊಟ್ಟಿ

ರಾಗಿ ಮುದ್ದೆ

ತರಕಾರಿ ಸಾಂಬಾರು

ತರಕಾರಿ ಪಲ್ಯ

ತಿಳಿಸಾರು/ರಸಂ

ಪುಳಿಯೋಗರೆ

ಪಾಯಸ/ಕೇಸರಿಬಾತ್ (ಶಿರಾ) ಹಾಗೂ ಸ್ಥಳೀಯ ಆಹಾರ ಪದ್ಧತಿಯಂತೆ ಇನ್ನಿತರೆ ಆಹಾರ ಪದಾರ್ಥಗಳ ತಯಾರಿಕೆ.

ಮೇಲ್ಕಂಡ ಆಹಾರ ಪದಾರ್ಥಗಳಲ್ಲಿ ಒಂದು ಆಹಾರ ಪದಾರ್ಥವನ್ನು ತಯಾರಿಸಲು ಲಾಟರಿ ಮೂಲಕ ಆಯ್ಕೆ ಮಾಡಿ ಅಭ್ಯರ್ಥಿಗಳಿಗೆ ಅರ್ಧ ಗಂಟೆಯೊಳಗೆ ತಯಾರಿಸಲು ಸೂಚಿಸುವುದು.

ಪ್ರಾಯೋಗಿಕ ಅರ್ಹತಾ ಪರೀಕ್ಷೆಗೆ ಬೇಕಾದ ಸಾಮಾಗ್ರಿಗಳಲ್ಲಿ ಪಾತ್ರೆ ಹಾಗೂ ಇತರೆ ಸಾಮಾಗ್ರಿಗಳನ್ನು ಸ್ಥಳೀಯ ವಿದ್ಯಾರ್ಥಿ ನಿಲಯಗಳಿಂದ ಹಾಗೂ ಹೆಚ್ಚಿಗೆ ಬೇಕಾದಲ್ಲಿ ಬಾಡಿಗೆಗೆ ಪಡೆದು ವ್ಯವಸ್ಥೆ ಮಾಡುವುದು. ಆಹಾರ ಸಾಮಾಗ್ರಿಗಳ ತಯಾರಿಕೆಗೆ ಬೇಕಾಗುವಷ್ಟು ಪ್ರಮಾಣದ ತರಕಾರಿ, ರವೆ, ಎಣ್ಣೆ, ಇತ್ಯಾದಿ ಪದಾರ್ಥಗಳನ್ನು ಜಿಲ್ಲಾ ಮಟ್ಟದಲ್ಲಿ ಆಹಾರ ಪದಾರ್ಥಗಳಿಗಾಗಿ ಅನುಮೋದನೆ ನೀಡಿರುವ ಟೆಂಡರ್‌ದಾರರಿಂದ ಅನುಮೋದಿತ ದರದಲ್ಲಿಯೇ ಖರೀದಿಸುವುದು. ಇದಕ್ಕೆ ತಗಲುವ ವೆಚ್ಚವನ್ನು ಜಿಲ್ಲಾಮಟ್ಟದ ಆಯ್ಕೆ ಸಮಿತಿಯು ಅಭ್ಯರ್ಥಿಗಳಿಂದ ಪಡೆಯಲಾದ ಅರ್ಜಿ ಶುಲ್ಕದಿಂದ ಭರಿಸುವುದು. ಉಳಿದ ಮೊತ್ತವನ್ನು ಸರ್ಕಾರದ ಲೆಕ್ಕ ಶೀರ್ಷಿಕೆಗೆ ಜಮಾ ಮಾಡತಕ್ಕದ್ದು. ಪ್ರಾಯೋಗಿಕ ಅರ್ಹತಾ ಪರೀಕ್ಷೆಯನ್ನು ಜಿಲ್ಲಾ ಕೇಂದ್ರ/ತಾಲ್ಲೂಕು ಕೇಂದ್ರದ ವಿದ್ಯಾರ್ಥಿ ನಿಲಯಗಳಲ್ಲಿ ಅಥವಾ ಬೇರೆ ಸ್ಥಳಗಳಲ್ಲಿ ನಡೆಸುವ ಅಧಿಕಾರವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ವಿವೇಚನೆಗೆ ನೀಡಲಾಗಿದೆ.

ಪ್ರಾಯೋಗಿಕ ಅರ್ಹತಾ ಪರೀಕ್ಷೆಯ ಸಂಪೂರ್ಣ ಚಿತ್ರಣವನ್ನು ವಿಡಿಯೋ ರೆಕಾರ್ಡ್ ಮಾಡುವುದು. ಪ್ರಾಯೋಗಿಕ ಅರ್ಹತಾ ಪರೀಕ್ಷೆಯಲ್ಲಿ ಅನರ್ಹರಾಗುವ ಅಭ್ಯರ್ಥಿಗಳಿಗೆ ಸ್ಥಳದಲ್ಲಿಯೇ ಸೂಕ್ತ ಹಿಂಬರಹ ನೀಡುವುದು. ಒಟ್ಟಾರೆ ಪ್ರಾಯೋಗಿಕ ಅರ್ಹತಾ ಪರೀಕ್ಷೆಯಲ್ಲಿ ಪಾರದರ್ಶಕತೆಯನ್ನು ಕಾಪಾಡತಕ್ಕದ್ದು.

ಪ್ರಾಯೋಗಿಕ ಅರ್ಹತಾ ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳ ಜ್ಯೇಷ್ಠತೆ ಹಾಗೂ ಮೀಸಲಾತಿಯನ್ನುಸರಿಸಿ ಅಡುಗೆ/ಅಡುಗೆ ಸಹಾಯಕರ ಹುದ್ದೆಗಳಿಗೆ ಆಯ್ಕೆ ಮಾಡುವುದು. ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಇಬ್ಬರು ಅಥವಾ ಹೆಚ್ಚು ಅಭ್ಯರ್ಥಿಗಳು ಸಮಾನ ಅಂಕಗಳನ್ನು ಗಳಿಸಿದ್ದು, ಅಂತಹ ಅಭ್ಯರ್ಥಿಗಳ ಆಯ್ಕೆ ಸಂದರ್ಭದಲ್ಲಿ ಅಂಕಗಳ ಅರ್ಹತಾ ಪಟ್ಟಿ ತಯಾರಿಸುವಾಗ ವಯಸ್ಸಿನ ಆಧಾರದ ಮೇಲೆ ನಿಗದಿಪಡಿಸುವುದು. ವಯಸ್ಸಿನಲ್ಲಿ ಹಿರಿಯರಾದವರನ್ನು ಅರ್ಹತಾ ಪಟ್ಟಿಯಲ್ಲಿ ಹಿರಿಯರೆಂದು ತೋರಿಸುವುದು.

**ಈ ಹುದ್ದೆಗಳ ನೇರ ನೇಮಕಾತಿಗಾಗಿ ಯಾವುದೇ ವಿಧವಾದ ಸಂದರ್ಶನ ಇರುವುದಿಲ್ಲ.**

22. ಅಭ್ಯರ್ಥಿಗಳ ಎಸ್.ಎಸ್.ಎಲ್.ಸಿ ಅಂಕಗಳ ಜ್ಯೇಷ್ಠತೆಯ ಆಧಾರದ ಮೇಲೆ, ತಾತ್ಕಾಲಿಕ ಪದಕ್ರಮ ಪಟ್ಟಿಯನ್ನು (Provisional List) ನ್ನು ಪ್ರಕಟಿಸಿ 15 ದಿನಗಳ ಕಾಲಾವಕಾಶವನ್ನು ಆಕ್ಷೇಪಣೆಗಳನ್ನು ಸಲ್ಲಿಸಲು ನೀಡುವುದು. ಸ್ವೀಕರಿಸಲ್ಪಡುವ ಆಕ್ಷೇಪಣೆಗಳಿಗೆ ಸೂಕ್ತ ಸಮಜಾಯಿಷಿ ನೀಡುವುದು.

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿ ಖಾಲಿ ಇರುವ ಅಡುಗೆಯವರು/ಅಡುಗೆ ಸಹಾಯಕರ ಹುದ್ದೆಗಳಿಗೆ ನೇರ ನೇಮಕಾತಿ ಆಯ್ಕೆ ಪ್ರಕ್ರಿಯೆಗೆ ನಿಗದಿಪಡಿಸಲಾದ ವೇಳಾ ಪಟ್ಟಿ

| ಕ್ರ. ಸಂ | ಪ್ರಕ್ರಿಯೆಗಳು | ನಿಗದಿಪಡಿಸಿದ ದಿನಾಂಕ |
|---|---|---|
| 1. | ನೇಮಕಾತಿ ಅಧಿಸೂಚನೆ ಹೊರಡಿಸುವುದು | 20.10.2016 |
| 2. | ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ | 19.11.2016 |
| 3. | ದಾಖಲಾತಿ ಪರಿಶೀಲನೆ ಹಾಗೂ ಅರ್ಹ ಅಭ್ಯರ್ಥಿಗಳಿಗೆ ಪ್ರಾಯೋಗಿಕ ಪರೀಕ್ಷೆ ನಡೆಸುವುದು. | 25.11.2016 ರಿಂದ 09.12.2016 |
| 4. | ತಾತ್ಕಾಲಿಕ ನೇಮಕಾತಿ ಪಟ್ಟಿ (Provisional List) ಪ್ರಕಟಿಸುವುದು | 17.12.2016 |
| 5. | ಆಕ್ಷೇಪಣೆ ಸಲ್ಲಿಸಲು ಕೊನೆಯ ದಿನಾಂಕ | 30.12.2016 |
| 6. | ಆಕ್ಷೇಪಣೆಗಳಿಗೆ ಸೂಕ್ತ ಸಮಜಾಯಿಷಿ ನೀಡಲು ಕೊನೆಯ ದಿನಾಂಕ | 01.01.2017 |
| 7. | ಅಂತಿಮ ನೇಮಕಾತಿ ಪಟ್ಟಿ ಪ್ರಕಟಿಸುವುದು | 02.01.2017 ಸಂಜೆ 5.30ಕ್ಕೆ |

**ಎನ್.ಆರ್. ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

ಸರ್ಕಾರದ ಆದೇಶ ಸಂಖ್ಯೆ: ಹಿಂವಕ 90 ಬಿಇಟಿ 2016 (ಭಾಗ-2), ಬೆಂಗಳೂರು ದಿನಾಂಕ: 29-09-2016ಕ್ಕೆ ಅನುಬಂಧ

**ಅನುಬಂಧ-2**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಅಡುಗೆಯವರ ಹುದ್ದೆ ನೇರ ನೇಮಕಾತಿಗೆ ಜಿಲ್ಲಾವಾರು ಹಂಚಿಕೆ ಮಾಡಲಾದ ಹುದ್ದೆಗಳ ಸಂಖ್ಯೆ**

| ಕ್ರ. ಸಂ. | ಜಿಲ್ಲೆಯ ಹೆಸರು | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ನೇರ ನೇಮಕಾತಿಗೆ ಹಂಚಿಕೆ ಮಾಡಲಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಬೆಂಗಳೂರು (ನ) | ಅಡುಗೆಯವರು ವೇತನ ಶ್ರೇಣಿ ₹. 10,440-16,400 | 25 |
| 2. | ಬೆಂಗಳೂರು (ಗ್ರಾ) | -- " -- | 24 |
| 3. | ಬೆಳಗಾವಿ | -- " -- | 80 |
| 4. | ಬಳ್ಳಾರಿ | -- " -- | 54 |
| 5. | ಬೀದರ್ | -- " -- | 50 |
| 6. | ಬಿಜಾಪುರ | -- " -- | 68 |
| 7. | ಬಾಗಲಕೋಟೆ | -- " -- | 79 |
| 8. | ಚಾಮರಾಜನಗರ | -- " -- | 19 |
| 9. | ಚಿಕ್ಕಮಗಳೂರು | -- " -- | 62 |
| 10. | ಚಿಕ್ಕಬಳ್ಳಾಪುರ | -- " -- | 60 |
| 11. | ಚಿತ್ರದುರ್ಗ | -- " -- | 65 |
| 12. | ದಕ್ಷಿಣ ಕನ್ನಡ | -- " -- | 54 |
| 13. | ಧಾರವಾಡ | -- " -- | 51 |
| 14. | ದಾವಣಗೆರೆ | -- " -- | 56 |
| 15. | ಗದಗ | -- " -- | 51 |
| 16. | ಕಲಬುರಗಿ | -- " -- | 62 |
| 17. | ಹಾಸನ | -- " -- | 10 |
| 18. | ಹಾವೇರಿ | -- " -- | 62 |
| 19. | ಕೊಡಗು | -- " -- | 33 |
| 20. | ಕೋಲಾರ | -- " -- | 35 |
| 21. | ಕೊಪ್ಪಳ | -- " -- | 41 |
| 22. | ಮಂಡ್ಯ | -- " -- | 60 |
| 23. | ಮೈಸೂರು | -- " -- | 58 |
| 24. | ರಾಯಚೂರು | -- " -- | 43 |
| 25. | ರಾಮನಗರ | -- " -- | 30 |
| 26 | ಶಿವಮೊಗ್ಗ | -- " -- | 86 |

| ಕ್ರ. ಸಂ. | ಜಿಲ್ಲೆಯ ಹೆಸರು | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ನೇರ ನೇಮಕಾತಿಗೆ ಹಂಚಿಕೆ ಮಾಡಲಾದ ಹುದ್ದೆಗಳ ಸಂಖ್ಯೆ |
|---|---|---|---|
| 27. | ತುಮಕೂರು | -- " -- | 84 |
| 28. | ಉತ್ತರ ಕನ್ನಡ | -- " -- | 65 |
| 29. | ಉಡುಪಿ | -- " -- | 24 |
| 30. | ಯಾದಗಿರಿ | -- " -- | 56 |
| | | ಒಟ್ಟು | **1547** |

**ಎನ್.ಆರ್. ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 90 ಬಿಇಟಿ 2016 (ಭಾಗ-2), ಬೆಂಗಳೂರು ದಿನಾಂಕ: 29-09-2016ಕ್ಕೆ ಅನುಬಂಧ**

**ಅನುಬಂಧ-3**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಅಡುಗೆ ಸಹಾಯಕರ ಹುದ್ದೆ ನೇರ ನೇಮಕಾತಿಗೆ ಜಿಲ್ಲಾವಾರು ಹಂಚಿಕೆ ಮಾಡಲಾದ ಹುದ್ದೆಗಳ ಸಂಖ್ಯೆ**

| ಕ್ರ. ಸಂ. | ಜಿಲ್ಲೆಯ ಹೆಸರು | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ನೇರ ನೇಮಕಾತಿಗೆ ಹಂಚಿಕೆ ಮಾಡಲಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಬೆಂಗಳೂರು (ನ) | ಅಡುಗೆ ಸಹಾಯಕರ ವೇತನ ಶ್ರೇಣಿ ₹. 9,600-14,550 | 92 |
| 2. | ಬೆಂಗಳೂರು (ಗ್ರಾ) | -- " -- | 37 |
| 3. | ಬೆಳಗಾವಿ | -- " -- | 92 |
| 4. | ಬಳ್ಳಾರಿ | -- " -- | 92 |
| 5. | ಬೀದರ್ | -- " -- | 66 |
| 6. | ಬಿಜಾಪುರ | -- " -- | 91 |
| 7. | ಬಾಗಲಕೋಟೆ | -- " -- | 92 |
| 8. | ಚಾಮರಾಜನಗರ | -- " -- | 81 |
| 9. | ಚಿಕ್ಕಮಗಳೂರು | -- " -- | 92 |
| 10. | ಚಿಕ್ಕಬಳ್ಳಾಪುರ | -- " -- | 80 |
| 11. | ಚಿತ್ರದುರ್ಗ | -- " -- | 92 |
| 12. | ದಕ್ಷಿಣ ಕನ್ನಡ | -- " -- | 92 |
| 13. | ಧಾರವಾಡ | -- " -- | 91 |
| 14. | ದಾವಣಗೆರೆ | -- " -- | 92 |
| 15. | ಗದಗ | -- " -- | 66 |
| 16. | ಕಲಬುರಗಿ | -- " -- | 92 |
| 17. | ಹಾಸನ | -- " -- | 92 |

| ಕ್ರ ಸಂ. | ಜಿಲ್ಲೆಯ ಹೆಸರು | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ನೇರ ನೇಮಕಾತಿಗೆ ಹಂಚಿಕೆ ಮಾಡಲಾದ ಹುದ್ದೆಗಳ ಸಂಖ್ಯೆ |
|---|---|---|---|
| 18. | ಹಾವೇರಿ | -- " -- | 88 |
| 19. | ಕೊಡಗು | -- " -- | 53 |
| 20. | ಕೋಲಾರ | -- " -- | 40 |
| 21. | ಕೊಪ್ಪಳ | -- " -- | 92 |
| 22. | ಮಂಡ್ಯ | -- " -- | 92 |
| 23. | ಮೈಸೂರು | -- " -- | 92 |
| 24. | ರಾಯಚೂರು | -- " -- | 74 |
| 25. | ರಾಮನಗರ | -- " -- | 92 |
| 26. | ಶಿವಮೊಗ್ಗ | -- " -- | 92 |
| 27. | ತುಮಕೂರು | -- " -- | 92 |
| 28. | ಉತ್ತರ ಕನ್ನಡ | -- " -- | 92 |
| 29. | ಉಡುಪಿ | -- " -- | 65 |
| 30. | ಯಾದಗಿರಿ | -- " -- | 74 |
| | | **ಒಟ್ಟು** | **2470** |

**P.R. 644**

**SC-500**

**ಎನ್.ಆರ್. ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಸುವರ್ಣ ಕರ್ನಾಟಕ ಅಭಿವೃದ್ಧಿ ಕಾರಿಡಾರ್ ಮತ್ತು ಲ್ಯಾಂಡ್ ಬ್ಯಾಂಕ್ ಕಾರ್ಯಕ್ರಮಗಳ ಅಡಿಯಲ್ಲಿ ಭೂಸ್ವಾಧೀನಕ್ಕೆ ಉದ್ದೇಶಿಸಿದ್ದ ಕೆಲವು ಜಮೀನುಗಳನ್ನು ಭೂಸ್ವಾಧೀನ ಪ್ರಕ್ರಿಯೆಯಿಂದ ಹೊರತುಪಡಿಸುವ ಕುರಿತು.

**ಓದಲಾಗಿದೆ:** ಸಿ.ಇ.ಓ. ಮತ್ತು ಇ.ಎಂ., ಕೆ.ಐ.ಎ.ಡಿ.ಬಿ. ಇವರ ಪತ್ರ ಸಂಖ್ಯೆ: ಕಕೈಪ್ರಅಮಂ/ಕೇಂ.ಕ/ಭೂಸ್ವಾ/2474/6506/2016-17, ದಿನಾಂಕ 27.07.2016.

**ಪ್ರಸ್ತಾವನೆ:**

ರಾಜ್ಯದ 2008-09ನೇ ಸಾಲಿನ ಆಯವಯ್ಯದಲ್ಲಿ ಘೋಷಣೆಯಾದ ಸುವರ್ಣ ಕರ್ನಾಟಕ ಕಾರಿಡಾರ್ ಯೋಜನೆಯಡಿಯಲ್ಲಿ ಕೈಗಾರಿಕಾ ಪ್ರದೇಶಗಳನ್ನು ಅಭಿವೃದ್ಧಿಪಡಿಸಲು ವಿವಿಧ ಜಿಲ್ಲೆಗಳಲ್ಲಿ ಭೂಸ್ವಾಧೀನ ಪ್ರಕ್ರಿಯೆಯನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಕೈಗೊಂಡಿರುತ್ತದೆ. 2010 ಮತ್ತು 2012ನೇ ಸಾಲಿನಲ್ಲಿ ನಡೆದ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶಗಳಲ್ಲಿ ಒಡಂಬಡಿಕೆ ಮಾಡಿಕೊಂಡ ಉದ್ಯಮಿಗಳಿಗೆ ಆದ್ಯತೆಯ ಮೇಲೆ ಜಮೀನುಗಳನ್ನು ಹಂಚಿಕೆ ಮಾಡುವ ಸಲುವಾಗಿ ಭೂ ಬ್ಯಾಂಕ್‌ನ್ನು ಸಿದ್ಧಪಡಿಸಲು ನಿರ್ಣಯಿಸಲಾದ ಮೇರೆಗೆ ಭೂ ಬ್ಯಾಂಕ್ ಯೋಜನೆಯಡಿ ರಾಜ್ಯದ ಪ್ರಮುಖ ಜಿಲ್ಲೆಗಳಲ್ಲಿ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆಯನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಕೈಗೊಂಡಿರುತ್ತದೆ.

ಈ ಯೋಜನೆಗಳಡಿಯಲ್ಲಿ ರಾಜ್ಯದ ಪ್ರಮುಖ ಜಿಲ್ಲೆಗಳಲ್ಲಿ 1,21,286-13 ಎಕರೆ ಜಮೀನನ್ನು ಭೂಸ್ವಾಧೀನಕ್ಕಾಗಿ ಗುರುತಿಸಲಾಗಿತ್ತು. ಈ ಪೈಕಿ 80,182-35 ಎಕರೆ ಜಮೀನಿನ ಸ್ವಾಧೀನಕ್ಕಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 28(1)ರ ಅಡಿಯಲ್ಲಿ ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿತ್ತು ಮತ್ತು ಅದರಲ್ಲಿ 40,924-13 ಎಕರೆ ಜಮೀನಿನ ಸ್ವಾಧೀನಕ್ಕಾಗಿ ಮಾತ್ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 28(4)ರ ಅಡಿಯಲ್ಲಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗಿತ್ತು.

2008–09ನೇ ಸಾಲಿನಿಂದ ಭೂಸ್ವಾಧೀನ ಪ್ರಕ್ರಿಯೆಯನ್ನು ಪ್ರಾರಂಭಿಸಿದ್ದಾಗ್ಯೂ ಮತ್ತು ಗುರುತಿಸಿರುವ ಜಮೀನುಗಳ ಪೈಕಿ ಬಾಕಿ ಇರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 28(1)ರ ಅಡಿಯಲ್ಲಿ ಪ್ರಾಥಮಿಕ ಅಧಿಸೂಚನೆ ಹೊರಡಿಸಿದ್ದಾಗ್ಯೂ, ಕೈಗಾರಿಕಾ ಜಮೀನುಗಳಿಗೆ ಕಡಿಮೆ ಬೇಡಿಕೆ ಇದ್ದದ್ದು ಅಥವಾ ಬೇಡಿಕೆ ಇಲ್ಲದಿದ್ದದ್ದು, ಭೂ ಮಂಜೂರಾತಿಗೆ ಸಂಬಂಧಿಸಿದ ವಿವಾದಾಂಶಗಳು, ಇಂಥ ಭೂಮಿಯ ಕೆಲವು ಭಾಗಗಳಲ್ಲಿ ಗೃಹ ನಿರ್ಮಾಣ ಬಡಾವಣೆಗಳು, ಕೃಷಿ ಭೂಮಿಗಳು, ಮನೆಗಳು, ಮುಂತಾದವು ಇದ್ದದ್ದು, ಭೂಸ್ವಾಧೀನ ಪ್ರಕ್ರಿಯೆಯನ್ನು ಮುಂದುವರೆಸದಿರುವಂತೆ ಮತ್ತು ಭೂಮಾಲೀಕರಿಗೆ ಜಮೀನುಗಳನ್ನು ಹಿಂದಿರುಗಿಸುವಂತೆ ಭೂಮಾಲೀಕರು, ರೈತರು ಮತ್ತು ಜನಪ್ರತಿನಿಧಿಗಳು ಕೋರಿರುವ ಮೇರೆಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಭೂಸ್ವಾಧೀನ ಪ್ರಕ್ರಿಯೆಯನ್ನು ಮುಂದುವರೆಸಲು ಸಾಧ್ಯವಾಗಿರುವುದಿಲ್ಲ.

ಭೂಸ್ವಾಧೀನ ಪ್ರಕ್ರಿಯೆ ಆರಂಭವಾಗಿದ್ದುದರಿಂದ ಮತ್ತು ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವ ಉದ್ದೇಶದಿಂದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 28(1)ರ ಅಡಿಯಲ್ಲಿ ಪ್ರಾಥಮಿಕ ಅಧಿಸೂಚನೆಗಳನ್ನು ಹೊರಡಿಸಲಾದ ಕಾರಣ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಈ ಜಮೀನುಗಳನ್ನು ಹಿಂದಿರುಗಿಸಲು ಸಾಧ್ಯವಾಗಿರುವುದಿಲ್ಲ ಹಾಗೂ ಅವುಗಳನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 4ರ ಅಡಿಯಲ್ಲಿ ಮುಂದಿನ ಭೂಸ್ವಾಧೀನ ಪ್ರಕ್ರಿಯೆಯಿಂದ ಹೊರತುಪಡಿಸಲು ಸಾಧ್ಯವಾಗಿರುವುದಿಲ್ಲ.

ಈ ಕುಂದು–ಕೊರತೆಗಳ ಕುರಿತು ಪರಿಶೀಲಿಸಲು ದಿನಾಂಕ: 20.07.2015ರಂದು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ವಿವರವಾದ ಪರ್ಯಾಲೋಚನೆಗಳ ನಂತರ ಜಂಟಿ ಪರಿಶೀಲನೆಗಳನ್ನು ನಡೆಸಿ ಮುಂದಿನ ಭೂಸ್ವಾಧೀನ ಪ್ರಕ್ರಿಯೆಯಿಂದ ಹೊರತುಪಡಿಸಬೇಕಾಗಿರುವ ಜಮೀನುಗಳನ್ನು ಗುರುತಿಸಲು ಮತ್ತು 2008–09ನೇ ಸಾಲಿನ ಆಯವ್ಯಯದಲ್ಲಿ ಸುವರ್ಣ ಕರ್ನಾಟಕ ಅಭಿವೃದ್ಧಿ ಕಾರಿಡಾರ್ ಕಾರ್ಯಕ್ರಮವನ್ನು ಘೋಷಿಸಿರುವುದರಿಂದ ಪ್ರಸ್ತಾವನೆಯನ್ನು ಸಚಿವ ಸಂಪುಟದ ಮುಂದೆ ಮಂಡಿಸಲು ನಿರ್ಣಯಿಸಲಾಯಿತು.

ಅದರಂತೆ ಸಂಬಂಧಪಟ್ಟ ಜಿಲ್ಲೆಯ ಡಿ.ಐ.ಸಿ.ಯ ಜಂಟಿ ನಿರ್ದೇಶಕರು, ಸಂಬಂಧಪಟ್ಟ ವಲಯ ಕಛೇರಿಯ ಅಭಿವೃದ್ಧಿ ಅಧಿಕಾರಿ ಮತ್ತು ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ. ಇವರುಗಳಿಂದ ಕೂಡಿದ ಜಂಟಿ ತಂಡವು ಪರಿಶೀಲನೆಗಳನ್ನು ನಡೆಸಿ, ಸಲ್ಲಿಸಿದ್ದ ವರದಿಯ ಕುರಿತು ದಿನಾಂಕ: 24.11.2015ರಂದು ನಡೆದ ಕೆ.ಐ.ಎ.ಡಿ.ಬಿ. ಮಂಡಳಿ ಸಭೆಯಲ್ಲಿ ಚರ್ಚಿಸಿ, 15,793–01 ಎಕರೆ ಜಮೀನನ್ನು ಸ್ವಾಧೀನ ಪ್ರಕ್ರಿಯೆಯಿಂದ ಹೊರತುಪಡಿಸಲು ಮಂಡಳಿಯು ಶಿಫಾರಸ್ಸು ಮಾಡಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತದೆ. ಆದರೆ, ಸ್ವಾಧೀನಗಳಿಗೆ ಸಂಬಂಧಪಟ್ಟ ಇತರ ಪ್ರಸ್ತಾವನೆಗಳನ್ನು ಮರುಪರಿಶೀಲಿಸುವಂತೆ ಮತ್ತು ಸಮಗ್ರ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸರ್ಕಾರವು ಮಂಡಳಿಗೆ ನಿರ್ದೇಶಿಸಿರುತ್ತದೆ.

ಅದರಂತೆ, ವಿಶೇಷ ಜಿಲ್ಲಾಧಿಕಾರಿಗಳು (ಭೂಸ್ವಾಧೀನ), ಕೆ.ಐ.ಎ.ಡಿ.ಬಿ. ಇವರು ಮುಂದಿನ ಸ್ವಾಧೀನ ಪ್ರಕ್ರಿಯೆಗಳಿಂದ ಹೊರತುಪಡಿಸಬೇಕಾದ ಉದ್ದೇಶಿತ ಜಮೀನುಗಳಿಗೆ ಭೇಟಿ ನೀಡಿದ ನಂತರ ಸಲ್ಲಿಸಿದ್ದ ವರದಿಯ ಕುರಿತು ದಿನಾಂಕ: 18.06.2016ರಂದು ನಡೆದ ಕೆ.ಐ.ಎ.ಡಿ.ಬಿ. ಮಂಡಳಿ ಸಭೆಯಲ್ಲಿ ಚರ್ಚಿಸಲಾಯಿತು. ಈಗಾಗಲೇ ಗುರುತಿಸಿದ್ದ 15,793–01 ಎಕರೆ ಜಮೀನುಗಳ ಪೈಕಿ ಬೆಂಗಳೂರು ನಗರ, ಹಾವೇರಿ ಮತ್ತು ಬಾಗಲಕೋಟೆ ಜಿಲ್ಲೆಗಳ ಒಟ್ಟು 3755–23 ಎಕರೆ ವಿಸ್ತೀರ್ಣದ ಜಮೀನು ಕೈಗಾರಿಕಾ ಪ್ರದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗಿದ್ದು, ಲ್ಯಾಂಡ್‌ಬ್ಯಾಂಕ್ ಯೋಜನೆಯಡಿಯಲ್ಲಿ ಗುರುತಿಸಲಾಗಿರುವ ಜಮೀನಿನಲ್ಲಿ ಸೇರಿರುವುದಿಲ್ಲ. ಆದಕಾರಣ ಈ ಜಮೀನನ್ನು ಲ್ಯಾಂಡ್‌ಬ್ಯಾಂಕ್ ಯೋಜನೆಯಡಿ ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿರುವ ಜಮೀನುಗಳ ಪೈಕಿ ಕೈಬಿಡಲು ಪ್ರಸ್ತಾಪಿಸಲಾಗಿದ್ದ 15793–01 ಎಕರೆ ಜಮೀನಿನಲ್ಲಿ ತೆಗೆದು, ಲ್ಯಾಂಡ್‌ಬ್ಯಾಂಕ್ ಯೋಜನೆಯಡಿ ಪ್ರಾಥಮಿಕ ಅಧಿಸೂಚನೆ ಹೊರಡಿಸಲಾದ ಜಮೀನುಗಳ ಪೈಕಿ ಕೈಬಿಡಲು ನಿರ್ಣಯಿಸಲಾದ ಬೆಳಗಾವಿ ಮತ್ತು ದಾವಣಗೆರೆ ಜಿಲ್ಲೆಗಳಿಗೆ ಸಂಬಂಧಿಸಿದ 1750–23 ಎಕರೆ ಜಮೀನನ್ನು ಸೇರಿಸಲಾಗಿರುತ್ತದೆ. ಅದರಂತೆ ಆದ ವ್ಯತ್ಯಾಸದಂತೆ ಒಟ್ಟು 13788–01 ಎಕರೆ ಜಮೀನನ್ನು ಹೊರತುಪಡಿಸಲು ಪರಿಷ್ಕೃತ ಪ್ರಸ್ತಾವನೆಯನ್ನು ದಿ:27.08.2016ರಂದು ನಡೆದ ಮಂಡಳಿಯ ಸಭೆಯಲ್ಲಿ ಅನುಮೋದಿಸಲಾಯಿತು.

ಮಂಡಳಿ ಸಭೆಯ ನಿರ್ಣಯದ ಮೇರೆಗೆ, ಸುವರ್ಣ ಕರ್ನಾಟಕ ಅಭಿವೃದ್ಧಿ ಕಾರಿಡಾರ್ ಕಾರ್ಯಕ್ರಮ ಮತ್ತು ಲ್ಯಾಂಡ್ ಬ್ಯಾಂಕ್ ಕಾರ್ಯಕ್ರಮಗಳ ಅಡಿಯಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 3(1), 1(3) ಮತ್ತು 28(1)ರ ಅಡಿಯಲ್ಲಿ ಪ್ರಾಥಮಿಕ ಅಧಿಸೂಚನೆಗಳನ್ನು ಹೊರಡಿಸಿದ್ದು, ಅಂತಿಮ ಅಧಿಸೂಚನೆ ಹೊರಡಿಸಿರದ ಜಮೀನಿನ ಪೈಕಿ ದಾವಣಗೆರೆ, ಚಿತ್ರದುರ್ಗ, ತುಮಕೂರು, ವಿಜಯಪುರ, ರಾಯಚೂರು, ಚಿಕ್ಕಮಗಳೂರು, ಮೈಸೂರು ಮತ್ತು ಬೆಳಗಾವಿ ಜಿಲ್ಲೆಗಳಾದ್ಯಂತ ಹರಡಿರುವ ಒಟ್ಟು 13,788–01 ಎಕರೆ ಜಮೀನನ್ನು ಭೂಸ್ವಾಧೀನ ಕ್ರಮದಿಂದ ಕೈಬಿಡಲು ಅನುಮೋದನೆ ನೀಡುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿದ್ದಾರೆ. ಆದುದರಿಂದ, ಈ ಕೆಳಗಿನ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 37 ಎಸ್‌ಪಿಕ್ಯೂ 2015, ಬೆಂಗಳೂರು, ದಿನಾಂಕ 18.10.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಸುವರ್ಣ ಕರ್ನಾಟಕ ಅಭಿವೃದ್ಧಿ ಕಾರಿಡಾರ್ ಕಾರ್ಯಕ್ರಮ ಮತ್ತು ಲ್ಯಾಂಡ್ ಬ್ಯಾಂಕ್ ಕಾರ್ಯಕ್ರಮಗಳ ಅಡಿಯಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 3(1), 1(3) ಮತ್ತು 28(1)ರ ಅಡಿಯಲ್ಲಿ ಪ್ರಾಥಮಿಕ ಅಧಿಸೂಚನೆಗಳನ್ನು ಹೊರಡಿಸಲಾಗಿರುವ ಈ ಕೆಳಕಂಡಂತೆ ಎಂಟು ಜಿಲ್ಲೆಗಳಾದ್ಯಂತ ಹರಡಿರುವ ಒಟ್ಟು 13,788–01 ಎಕರೆ ವಿಸ್ತೀರ್ಣದ ಜಮೀನುಗಳನ್ನು ಮುಂದಿನ ಭೂಸ್ವಾಧೀನ ಪ್ರಕ್ರಿಯೆಗಳಿಂದ ಹೊರತುಪಡಿಸಲು 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 4ರ ಅಡಿಯಲ್ಲಿ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರವು ಆದೇಶಿಸಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ಗ್ರಾಮ | ವಿಸ್ತೀರ್ಣ ಎ–ಗು | ಒಟ್ಟು ವಿಸ್ತೀರ್ಣ ಎ–ಗು | ಕಲಂ 28(1)ರ ಅಧಿಸೂಚನೆ ದಿನಾಂಕ |
|---|---|---|---|---|---|
| 1. | ದಾವಣಗೆರೆ | ಅನಂತನಹಳ್ಳಿ | 200–00 | 1117–12 | 18.01.2010 |
| | | ನಾರಾಯಣಪುರ | | | |
| | | ಅರಬನಕಟ್ಟೆ | 200–36 | | 15.07.2009 |
| | | ಚಿಕ್ಕೋಲಿಕೆರೆ | 716–16 | | 19.01.2013 |
| | | ಲಕ್ಷ್ಮಿಸಾಗರ | | | |
| | | ಅಜ್ಜಿಹಳ್ಳಿ | | | |
| 2. | ಚಿತ್ರದುರ್ಗ | ಜಾನುಕೊಂಡ | 200–00 | 700–00 | 22.05.2008 |
| | | ದಳವಾಯಿಹಳ್ಳಿ | | | |
| | | ದೊಡ್ಡ ಉಳ್ಳಾರ್ತಿ ಕಾವಲ್ | 500–00 | | 05.06.2009 |
| 3. | ತುಮಕೂರು | ಮಾದಿಹಳ್ಳಿ | 211–35 | 1365–19 | 05.10.2009 |
| | | ಮಡೆನೂರು | | | |
| | | ತಿಮ್ಮಳ್ಳಿ ಪಾಳ್ಯ | 863–18 | | 23.10.2009 |
| | | ಸೋಪನಹಳ್ಳಿ | | | |
| | | ಕುಂದರನಹಳ್ಳಿ | | | |
| | | ಸಾಗರನಹಳ್ಳಿ | | | |
| | | ಬಿದರಹಳ್ಳಿ | | | |
| | | ಅಮೃತಮಹಲ್ ಕಾವಲ್ | | | |
| | | ಗೊಟ್ಟಿಗೆರೆ | 290–06 | | 13.01.2010 |
| 4. | ವಿಜಯಪುರ | ಮುಳವಾಡ | 1191–08 | 1191–08 | 16.01.2010 |
| 5. | ರಾಯಚೂರು | ದೇವಸೊಗೂರು | 2072–22 | 2072–22 | 19.08.2010 |
| | | ಹೆಗ್ಗಸನಹಳ್ಳಿ | | | |
| | | ವಡ್ಲೂರು | | | |
| 6. | ಚಿಕ್ಕಮಗಳೂರು | ಅಂಬಳೆ | 160–00 | 1512–03 | 01.01.2010 |
| | | ನಗದಿಯತ್/ ತಂಗಲ್ಲಿಕಾವಲ್ | 1352–03 | | 30.11.2009 |
| | | ಕಾನಗೊಂಡನಹಳ್ಳಿ | | | |
| | | ಬೀರನಹಳ್ಳಿ | | | |
| | | ಕಾರೇಹಳ್ಳಿ | | | |

| ಕ್ರ. ಸಂ. | ಜಿಲ್ಲೆಯ ಹೆಸರು | ಗ್ರಾಮ | ವಿಸ್ತೀರ್ಣ ಎ–ಗು | ಒಟ್ಟು ವಿಸ್ತೀರ್ಣ ಎ–ಗು | ಕಲಂ 28(1)ರ ಅಧಿಸೂಚನೆ ದಿನಾಂಕ |
|---|---|---|---|---|---|
| 7. | ಮೈಸೂರು | ಮನುಗನಹಳ್ಳಿ | 3488–26 | 4478–34 | 07.06.2010 |
| | | ಹುಲ್ಲೇನಹಳ್ಳಿ ಮತ್ತಿತರೆ ಗ್ರಾಮಗಳು | | | |
| | | ಹಳ್ಳದಮನುಗನಹಳ್ಳಿ | 990–08 | | 14.05.2010 |
| 8. | ಬೆಳಗಾವಿ | ಪೀರನವಾಡಿ | 739–24–11.06 | 739–24–11.06 | 10.11.2009 |
| | | ಕುಟೀಲವಾಡಿ | | | |
| | | ಕಮಕಾರಟ್ಟಿ | 610–39 | 610–39 | 26.03.2010 |
| | | ಕೊಂಡಸಕೊಪ್ಪ | | | |
| | | | **ಒಟ್ಟು ವಿಸ್ತೀರ್ಣ** | **13788–01–11.06** | |

ಮೇಲ್ಕಂಡ ಒಟ್ಟು 13,788–01 ಎಕರೆ ವಿಸ್ತೀರ್ಣದ ಜಮೀನುಗಳನ್ನು ಮುಂದಿನ ಭೂಸ್ವಾಧೀನ ಪ್ರಕ್ರಿಯೆಗಳಿಂದ ಹೊರತುಪಡಿಸಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 4ರ ಅಡಿಯಲ್ಲಿ ಅಧಿಸೂಚನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಈ ಆದೇಶವನ್ನು ಸಚಿವ ಸಂಪುಟ ಟಿಪ್ಪಣಿ ಸಂಖ್ಯೆ: ಸಿ: 465/2016 ದಿನಾಂಕ 19.09.2016ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

**P.R. 645**

**SC-100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

**ಬಿ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಾರಿಗೆ ಸಚಿವಾಲಯ

**ವಿಷಯ :** ಸಚಿವಾಲಯದ ಸಾರಿಗೆ ಇಲಾಖೆಯ ಆಡಳಿತ ನಿಯಂತ್ರಣಕ್ಕೊಳಪಡುವ ಡಿ.ದೇವರಾಜ ಅರಸ್ ಟ್ರಕ್ ಟರ್ಮಿನಲ್ (ಲಿಮಿಟೆಡ್) ನಲ್ಲಿ ಜಾಗೃತ ಕೋಶ ಸೃಜಿಸಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಿಸುವ ಕುರಿತು.

**ಓದಲಾಗಿದೆ:–**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯ 2016, ದಿನಾಂಕ:14/03/2016.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯ 2016, ದಿನಾಂಕ:22/06/2016

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ 1988 ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ, ಕಾರ್ಯವಿಧಾನ/ ಮಾರ್ಗಸೂಚಿಗಳನ್ನು ನೀಡಲಾಗಿದೆ. ಮುಂದುವರೆದು, ಸದರಿ ಮಾರ್ಗಸೂಚಿಯನ್ವಯ ಕರ್ನಾಟಕ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಗಳನ್ನೊಳಗೊಂಡಂತೆ ನಿರ್ದೇಶನಾಲಯ / ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳ ಕೇಂದ್ರ ಸ್ಥಾನದ ಕಚೇರಿಗಳಲ್ಲಿ ಒಂದು ಜಾಗೃತ ಕೋಶ ರಚಿಸಬೇಕಾಗಿದೆ. ಈ ಜಾಗೃತ ಕೋಶಕ್ಕೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer)ಯು ಮುಖ್ಯಸ್ಥರಾಗಿರುತ್ತಾರೆ ಹಾಗೂ

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಇಲಾಖಾ/ಸಂಸ್ಥೆಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer next in Seniority) ಮುಖ್ಯ ಜಾಗೃತ ಅಧಿಕಾರಿಯನ್ನಾಗಿ ನೇಮಿಸಬೇಕಾಗಿದ್ದು ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಾರಿಇ 52 ಸಾಇಸೇ 2016, ಬೆಂಗಳೂರು, ದಿನಾಂಕ : 06ನೇ ಅಕ್ಟೋಬರ್, 2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಚಿವಾಲಯದ ಸಾರಿಗೆ ಇಲಾಖೆಯ ಆಡಳಿತ ನಿಯಂತ್ರಣಕ್ಕೊಳಪಡುವ ಡಿ.ದೇವರಾಜ ಅರಸ್ ಟ್ರಕ್ ಟರ್ಮಿನಲ್ (ಲಿಮಿಟೆಡ್) ನಲ್ಲಿ ಜಾಗೃತ ಕೋಶ ಸೃಜಿಸಿ, ಸಹಾಯಕ ಕಾರ್ಯಪಾಲಕ ಅಭಿಯಂತರರು, ಡಿ.ದೇವರಾಜ ಅರಸ್ ಟ್ರಕ್ ಟರ್ಮಿನಲ್ (ಲಿಮಿಟೆಡ್) ಇವರನ್ನು ಮುಖ್ಯ ಜಾಗೃತ ಅಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಮುಖ್ಯ ಜಾಗೃತ ಅಧಿಕಾರಿ/ ಜಾಗೃತ ಅಧಿಕಾರಿಗಳ ಕರ್ತವ್ಯಗಳನ್ನು ನಿರ್ದಿಷ್ಟಪಡಿಸಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016 (ಭಾಗ–1), ದಿನಾಂಕ: 06/07/2016 ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಿಂದ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 648

S.C. 100

**ಕೆ. ಬೀರೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಾರಿಗೆ ಇಲಾಖೆ.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.